# ನಮ್ಮ ನದಿಗಳು




**ಒಂದು ರುಪಾಯಿ.**

ನೋತ್ಪದ್ಯತೇ ವಿನಾಜ್ಞಾನಂ
ವಿಚಾರೇಣಾನ್ಯ ಸಾಧನೈಃ

OUR RIVERS—*Re. 1/-*

Printed by O. Srinivasan, at Jupiter Press, Bangalore 2 and Published by V. S. Narayana Rao, Managing Director, Vichara Sahitya Private Ltd., Bangalore 2.



ಗಗನಚುಕ್ಕಿ ಜಲಪಾತ

# ನಮ್ಮ ನದಿಗಳು

---

### ೧. ಜಗದ ಜನವೆಲ್ಲ ಒಂದೆ ಅವಕೆ

ಹರಿಯುವ ಹೊಳೆ, ಧುಮುಕುವ ನೀರು, ಅಪ್ಪಳಿಸುವ ಅಲೆ ಇವುಗಳನ್ನು ನೋಡುವುದೇ ಒಂದು ಆನಂದ. ಎಷ್ಟು ನೋಡಿದರೂ ಕಣ್ ಮನಗಳು ದಣಿಯವು. ಮಹಾ ಪ್ರತಿಭಾವಂತರಾದ ನಮ್ಮ ಪ್ರಧಾನಿ ನೆಹರೂ ಕೇಳುತ್ತಾರೆ—"ನಮ್ಮ ದೇಶದ ನದಿಗಳ ಕತೆ ಬರೆಯಬಲ್ಲ ಸಾಮರ್ಥ್ಯವಂತರೂ, ಬುದ್ಧಿಶಾಲಿಗಳೂ ಯಾರೂ ಇಲ್ಲವೆ" ಎಂದು.



"ಜಗತ್ಕಥಾವಲ್ಲರಿ" ಎಂಬ ಜಗತ್ತಿನ ಇತಿಹಾಸ ಮತ್ತು "ಭಾರತದರ್ಶನ" ಎಂಬ ಪ್ರಸಿದ್ಧ ಗ್ರಂಥಗಳ ಲೇಖಕರಾದ ಜವಹರ್ ಲಾಲ್ ನೆಹರೂ ಈ ಪ್ರಶ್ನೆ ಕೇಳುತ್ತಾರೆ. ಅವರೇ ನಮ್ಮ ನದಿಗಳ ಕತೆ ಬರೆದಿದ್ದರೆ ಅದೆಷ್ಟು ಸೊಗಸಾಗಿರುತ್ತಿತ್ತು, ಎಷ್ಟು ಸ್ವಾರಸ್ಯವಾಗಿರು

ತ್ತಿತ್ತು. ನದಿಗಳ ಮಂಜುಳವಾಣಿ ಅರ್ಥಮಾಡಿಕೊಂಡು ಬರೆವ ಮಹಾತ್ಮರು ಯಾರಿರುವರು.

ನದಿ ಒಮ್ಮೆ ಥಳಥಳಿಸುತ್ತಾ, ಝುಳುಝುಳು ಶಬ್ದ ಮಾಡುತ್ತಾ ಹರಿಯುತ್ತದೆ. ಮತ್ತೊಮ್ಮೆ ಆರ್ಭಟಿಸುತ್ತಾ, ಬಗ್ಗಡವಾದ ನೀರು ಹೊತ್ತು ಭೋರ್ಗರೆಯುತ್ತಾ ಉಕ್ಕಿ ಹರಿಯುತ್ತದೆ. ಇದರಿಂದ ಎಲ್ಲೋ ಮಳೆಯಾಗಿದೆ ಎಂದು ಅರ್ಥವಾಗುತ್ತದೆ.

ಬಹುತೇಕ ನದಿಗಳು ಅನಂತಕಾಲದಿಂದ ಹರಿಯುತ್ತಿವೆ. ಅದೆಷ್ಟು ನೀರು ಅವುಗಳಲ್ಲಿ ಹರಿದು ಹೋಗಿದೆಯೋ. ನೀವು ಹೇಳಬಲ್ಲಿರಾ? ಕಲ್ಪನಾತೀತ, ಅಳೆಯಲಂತೂ ಸಾಧ್ಯವಿಲ್ಲ, ಅಲ್ಲವೇ?

ಗಾಳಿಯಿಲ್ಲದೆ ಮನುಷ್ಯ ಕೆಲವು ನಿಮಿಷಗಳೂ ಇರಲಾರ. ಅಷ್ಟೇ ಅತ್ಯಗತ್ಯವಾದುದು ನೀರು. ನೀರಿಲ್ಲದೆ ಹಲವು ದಿನಗಳಿಗಿಂತ ಹೆಚ್ಚುಕಾಲ ಜೀವಿಸ



ಲಾರ. ಹುಟ್ಟಿನಿಂದ ಸಾಯುವವರೆಗೂ ಗಾಳಿಯಷ್ಟೇ ಅಗತ್ಯವಾದುದು ನೀರು.

ಮಾನವ ಅನಾಗರಿಕ ಕಾಲದಲ್ಲಿ ಮೃಗಗಳನ್ನು ಕೊಂದು ತಿಂದು ಬದುಕುತ್ತಿದ್ದ. ಬೀಜದಿಂದ ಸಸ್ಯಗಳು ಬೆಳೆಯುತ್ತವೆ. ಈ ತಿಳುವಳಿಕೆ ಅವನ ನಾಗರೀಕತೆಯ ಬೆಳವಣಿಗೆಯಲ್ಲಿ ಮೊದಲ ಹೆಜ್ಜೆ. ನೆಲವನ್ನು ಕೆರೆದು, ಕಾಳು ಚೆಲ್ಲಿ, ಮಳೆಯಾವಾಗ ಆದೀತೋ ಎಂದು ಮುಗಿಲ ಕಡೆ ನೋಡುವುದೇ ಅವನ ಕೆಲಸ. ಮಳೆ ಬಂದರೆ ಬೆಳೆ, ಇಲ್ಲವಾದರೆ ಬರ, ಕ್ಷಾಮ.

ನದಿ ಕಿಲಕಿಲನೆ ನಗುತ್ತ ಹರಿಯುತ್ತಿದೆ—"ಎಲೋ, ಮಾನವ, ನಾನು ಹುಟ್ಟಿ ಹರಿಯುತ್ತಿರುವುದು ನಿನಗಾಗಿ, ನಿನ್ನ ಸೇವೆಗಾಗಿ. ಮುಗಿಲ ಕಡೆ



ನಿಸ್ಸಹಾಯಕನಾಗಿ ನೋಡುವೆ ಏಕೆ? ನನ್ನನ್ನು ಬಳಸಿಕೋ, ನನ್ನಿಂದ ಪ್ರಯೋಜನ ಪಡೆ'' ಎಂದಿತು.

ಬುದ್ಧಿವಂತ ಮನುಷ್ಯ ಕಾಲುವೆ ತೋಡಿ, ಗದ್ದೆ ತೋಟಗಳಿಗೆ ನೀರು ಹಾಯಿಸಿ ಗಿಡಮರಗಳನ್ನು ಬೆಳೆಯಿಸುತ್ತಾ ಬಂದ. ಹಳ್ಳದಲ್ಲಿನ ನೀರನ್ನು ಕಪಿಲೆಗಳ ಸಹಾಯದಿಂದ ಎತ್ತಿ ಹಾಯಿಸ ತೊಡಗಿದ. ಇನ್ನೂ ಸ್ವಲ್ಪ ಬುದ್ಧಿವಂತನಾದಮೇಲೆ ಕಟ್ಟೆ ಕಟ್ಟಿ, ನೀರಿನ ಮಟ್ಟ ಎತ್ತರಿಸಿ, ಕಾಲುವೆ ತೋಡಿ ಸಾಗುವಳಿ ಮಾಡತೊಡಗಿದ.

ಈಗಿನ ಆಧುನಿಕ ಕಾಲದಲ್ಲಿ ದೊಡ್ಡ ಜಲಾಶಯಗಳನ್ನು ನಿರ್ಮಿಸಿ ನಾನಾವಿಧಗಳಲ್ಲಿ ಪ್ರಯೋಜನ ಪಡೆಯುತ್ತೇವೆ. ನೂರಾರು ಮೈಲಿಗಳ ಕಾಲುವೆ ತೋಡಿ, ನೀರು ಹಾಯಿಸಿ ಲಕ್ಷಾಂತರ ಎಕರೆ ಸಾಗುವಳಿ ಮಾಡುತ್ತೇವೆ. ಮಳೆಗಾಲದಲ್ಲಿ ಹೆಚ್ಚಾಗಿ



ಬೀಳುವ ಮಳೆಯನ್ನು ಜಲಾಶಯಗಳಲ್ಲಿ ತಡೆಹಿಡಿದು, ಶೇಖರಿಸಿ ಬೇಸಿಗೆಯಲ್ಲಿ ಬಳಸುತ್ತೇವೆ. ಸುಲಭವಾಗಿ ದೋಣಿಯಲ್ಲಿ ಒಂದು ಕಡೆಯಿಂದ ಮತ್ತೊಂದು ಪ್ರದೇಶಕ್ಕೆ ಸಾಮಾನು ಸಾಗಿಸುತ್ತೇವೆ. ವಿದ್ಯುತ್ ಶಕ್ತಿಯನ್ನು ಉತ್ಪನ್ನಮಾಡಿ ಬೆಳಕು ಪಡೆಯುತ್ತೇವೆ. ಅನೇಕ ಕೈಗಾರಿಕೆಗಳನ್ನೂ, ಯಂತ್ರಾಲಯಗಳನ್ನೂ ನಡಸುತ್ತೇವೆ.

ನದೀ ನೀರನ್ನು ಕುಡಿಯುತ್ತೇವೆ, ಸ್ನಾನಕ್ಕೆ ಬಟ್ಟೆ ಒಗೆಯುವುದಕ್ಕೆ ಬಳಸುತ್ತೇವೆ. ಅಡುಗೆಗೆ ಉಪಯೋಗಿಸುತ್ತೇವೆ. ಎಮ್ಮೆಗಳಿಗೂ ಮೈ ತೊಳಸು ತ್ತೇವೆ; ಸ್ತ್ರೀಪುರುಷರೂ, ರಾಜಮಹಾರಾಜರೂ ಮೈ



ತೊಳೆಯುತ್ತಾರೆ. ಮೀನುಗಳು ಮಿನುಗುತ್ತವೆ, ಮೊಸಳೆಗಳೂ ಇರುತ್ತವೆ. ಗೊಬ್ಬರದ ಗದ್ದೆಗೂ ನೀರು ಹಾಯಿಸುತ್ತೇವೆ; ಸುಂದರವಾದ ಗುಲಾಬಿ ತೋಟಕ್ಕೂ ನೀರು ಬಿಡುತ್ತೇವೆ.

"ಅಯ್ಯೋ, ಹೀಗೇಕೆ ಮಾಡುತ್ತೀರಿ. ನನ್ನನು ಒಳ್ಳೆಯ ಕೆಲಸಗಳಿಗೆ ಮಾತ್ರ ಬಳಸಿ" ಎಂದು ಎಂದಾದರೂ ಹೊಳೆ ಹೇಳಿಕೊಳ್ಳುತ್ತದೆಯೇ? ಸಜ್ಜನರ ಲಕ್ಷಣವೇ ಹೀಗೆ. ಅಪಕಾರಕ್ಕೆ ಪ್ರತ್ಯುಪಕಾರ ಮಾಡುವುದು. ಎಷ್ಟು ದೊಡ್ಡ ಗುಣ.



ಸೂರ್ಯ ಉದಯಿಸುತ್ತಾನೆ. ಏಳಿ, ಹೊತ್ತಾಯಿತು. ಏಳಾಯಿತು, ಬಾಗಿಲು ತೆಗೆಯಿರಿ ಎಂದು ಬಾಗಿಲ ಬಳಿ ಕಾದಿರುತ್ತಾನೆ. ಬಾಗಿಲು ತೆಗೆಯುತ್ತಲೇ ಕತ್ತಲನ್ನು ಓಡಿಸಿ, ಮನೆಯನ್ನು ಬೆಳಗಿಸಲು ಒಳಕ್ಕೆ ಪ್ರವೇಶಿಸುತ್ತಾನೆ. ಬಾಗಿಲು ತೆರೆಯದಿದ್ದರೆ, ಹೊರಗೇ ಕಾದಿರುತ್ತಾನೆ, ೧೨ ಘಂಟೆವರೆಗೆ. ಆಮೇಲೆ ಬೇರೆ ದಿಕ್ಕಿನಿಂದ, ಕಿಟಕಿಯಿಂದ ನಿಮ್ಮಕಡೆ ಇಣಿಕಿನೋಡು

ತ್ತಾನೆ. ಕಿಟಕಿ ಬಾಗಿಲನ್ನು ಹಾಕಿದರೆ ಕತ್ತಲಾಗುವ ವರೆಗೂ ಕಾದಿದ್ದು, ನಾಳೆ ಬೆಳಗ್ಗೆ ಮತ್ತೆ ಬರುತ್ತೇನೆ ಎಂದು ಹೊರಟುಹೋಗುತ್ತಾನೆ. ಬೆಳಕು ನೀಡು ವುದು ನನ್ನ ಕೆಲಸ, ಅದನ್ನು ಬಳಸಿಕೊಳ್ಳುವುದು ನಿಮ್ಮ ಕೆಲಸ ಎಂದು ಎಚ್ಚರಿಸುತ್ತಾನೆ.

ಇದು ಬಡವನ ಮನೆ, ಅದು ಶ್ರೀಮಂತನ ಬಂಗಲೆ ಎಂಬ ಭೇದ ಸೂರ್ಯ ತೋರುವುದಿಲ್ಲ. ಇದು ನನ್ನ ಪ್ರಾಂತ, ಅಲ್ಲಿ ವಾಸಿಸುವವರು ಬೇರೆ, ಆದ್ದರಿಂದ ನಾನು ಅಲ್ಲಿಗೆ ಹೋಗುವುದಿಲ್ಲ, ಬೆಳಕು ಕೊಡುವುದಿಲ್ಲ ಎಂದು ಮುಷ್ಕರ ಹೂಡುವುದಿಲ್ಲ. ನದಿ, ಗಾಳಿ, ಬೆಳಕು, ಮೋಡ, ಮಳೆ ಇವೆಲ್ಲವೂ ಹೀಗೆಯೇ. ಬಡವ—ಭಾಗ್ಯವಂತ, ವಿವೇಕಿ—ಅವಿವೇಕಿ, ಬಿಳಿಯ—ಕರಿಯ ಎಂಬ ಭೇದ ಅವು ಅರಿಯವು. ಭಾರತವೆಲ್ಲ ಒಂದೇ, ಭಾರತದ ಜನ ವೆಲ್ಲ ಒಂದೆ ಅವಕೆ. ಜಗದ ಜನವೆಲ್ಲ ಒಂದೇ.



## ೨. ಧರೆಗಿಳಿದ ಗಂಗೆ

ನದಿಗಳು ನಾನಾವಿಧಗಳಲ್ಲಿ ಸಲ್ಲಿಸುವ ಸೇವೆ ಮಾನವನ ಮನಸ್ಸಿನ ಮೇಲೆ ಪರಿಣಾಮ ಮಾಡದೆ ಹೋಗಲಿಲ್ಲ. ಅವುಗಳಲ್ಲಿ ಅವನಿಗೆ ಪೂಜ್ಯಭಾವನೆ ಬೆಳೆಯತೊಡಗಿತು. ಅವು ದೇವತಾ ಸ್ವರೂಪಿಗಳೆಂದು ಪೂಜಿಸತೊಡಗಿದ. ದೇವಲೋಕದಿಂದ ಮಾನವಸೇವೆಗಾಗಿ ಧರೆಗಿಳಿದು ಬಂದ ದೇವತೆಗಳೇ ನದಿಗಳೆಂದು ಹಿಂದೂಗಳು ಭಾವಿಸುತ್ತಾರೆ. ನದಿಗಳನ್ನು ತಾಯಿಯಂತೆ ಮಾತೃಭಕ್ತಿಯಿಂದ ನೋಡುತ್ತಾರೆ. ನದಿಗಳೆಲ್ಲವೂ ಸ್ತ್ರೀಲಿಂಗ ವಾಚಕ. ಗಂಗೆಯನ್ನು ಸಾಮಾನ್ಯವಾಗಿ 'ಗಂಗಾಮಾತಾ' ಎಂದು ಕರೆಯುತ್ತಾರೆ. ಭಾರತಿ, ಭಾಗೀರತಿ, ಅಲಕನಂದ, ಜಾಹ್ನವಿ ಮೊಲಾದ ಸುಂದರ ಹೆಸರುಗಳೂ ಇವೆ.

ಈ ಪೂಜ್ಯ ಭಾವನೆಗೆ ಅನುಗುಣವಾದ ಪುರಾಣಗಳೂ ಕಥೆಗಳೂ ಹುಟ್ಟಿಕೊಳ್ಳುವುದು ಸಹಜವಷ್ಟೆ. ಗಂಗಾ ನದಿ ಹಿಮಾಚ್ಛಾದಿತ ಹಿಮಾಲಯದಿಂದ ಭೂಮಿಗೆ ರಭಸದಿಂದ ಇಳಿದು ಬರುವುದು ಎಷ್ಟು ಸುಂದರವಾದ ಸಾಹಿತ್ಯವಾಗಿದೆ.

ಗಂಗೆ ಸ್ವರ್ಗಲೋಕದಲ್ಲಿ ದೇವತೆಗಳ ಅಮೃತವಾಗಿದ್ದಳು. ಹೀಗಿರುವಲ್ಲಿ ಸಗರ ಚಕ್ರವರ್ತಿಯ

೬೦,೦೦೦ ಮಕ್ಕಳು ಕಪಿಲ ಋಷಿಯ ಕೋಪಕ್ಕೆ ಒಳಗಾಗಿ ಸುಟ್ಟುಹೋಗುತ್ತಾರೆ. ಇವರಿಗೆ ಸದ್ಗತಿ ದೊರೆಯಲು ಅವರ ಬೂದಿಯನ್ನು ಗಂಗೆಯಲ್ಲಿ ಕದಡುವುದೊಂದೇ ಮಾರ್ಗವಿತ್ತು. ಸಗರ ಚಕ್ರವರ್ತಿಯ ವಂಶಜನಾದ ಭಗೀರಥನು ಗಂಗೆಯನ್ನು ಭೂಲೋಕಕ್ಕೆ ಕರಸಲು ಘೋರ ತಪಸ್ಸು ಕೈಗೊಂಡನು. ಗಂಗೆ ರಭಸದಿಂದ ಭೂಲೋಕಕ್ಕೆ ಇಳಿದು ಬರುತ್ತಿರಲು, ಕುಪಿತನಾದ ಈಶ್ವರನು ತನ್ನ ಜಟೆಯಲ್ಲಿ ಅವಳನ್ನು ಧರಿಸಿದನು. ಒಂದು ತೊಟ್ಟು ನೀರೂ ಹೊರಕ್ಕೆ ಬರಲಿಲ್ಲ. ಆಗ ಭಾಗೀರಥನು ಈಶ್ವರನನ್ನು ದೀರ್ಘತಪಸ್ಸಿನಿಂದ ಒಲಿಸಿ, ಗಂಗೆಯು ನಿಧಾನವಾಗಿ ಧರೆಗಿಳಿಯುವಂತೆ ಮಾಡಿದನು. ಗರ್ವಭಂಗಗೊಂಡ ಗಂಗೆಯು ತಪಸ್ಸು ಮಾಡುತ್ತಿದ್ದ ಜಹ್ನು ಋಷಿಯ ಆಶ್ರಮವನ್ನು ಹೊಗಲು, ತಪೋಭಂಗದಿಂದ ಆತ ಕೋಪಗೊಂಡು ಗಂಗೆಯನ್ನು ಆಪೋಷಣೆ ತೆಗೆದುಕೊಳ್ಳುತ್ತಾನೆ. ಭಗೀರಥ ಇಷ್ಟರಿಂದಲೇ ಭಗ್ನಮನೋರಥನಾಗುವುದಿಲ್ಲ. ಒಂದೇ ಮನಸ್ಸಿನಿಂದ ತನ್ನ ಪ್ರಯತ್ನ ಮುಂದುವರಿಸುತ್ತಾನೆ. ಕಡೆಗೂ ಗಂಗೆಯನ್ನು ತನ್ನ ಪೂರ್ವಜರ ಬೂದಿಯಮೇಲೆ ಹರಸಿ ಅವರಿಗೆ ಮೋಕ್ಷಗಳಿಸಿಕೊಡುತ್ತಾನೆ. ಇದರಿಂದಲೇ ಭಗೀರಥ ಪ್ರಯತ್ನ ಎಂಬ ನಾಣ್ಣುಡಿ ಹುಟ್ಟಿ

ಕೊಂಡಿರುವುದು. ಕಷ್ಟ ಎಷ್ಟೇ ಇರಲಿ, ಏನೇ ಬರಲಿ ಎಲ್ಲವನ್ನೂ ಧೈರ್ಯದಿಂದ ಸಹನೆಯಿಂದ ಸಹಿಸಿಕೊಂಡು ಕಾರ್ಯ ಕೈಗೂಡಲು ಮಾಡುವ ಮಹಾ ಸಾಹಸವೇ ಭಗೀರತ ಪ್ರಯತ್ನ. ಗಂಗೆ ಯಂಥಾ ಮಹಾ ಶಕ್ತಿಯನ್ನು ಮಾನವ ತನ್ನ ಹತೋ ಟಿಗೆ ತೆಗೆದುಕೊಳ್ಳುವ ಮಹಾ ಸಾಧನವೇ ಭಗೀರತ ಪ್ರಯತ್ನ.

ಸಗರ ಚಕ್ರವರ್ತಿಯ ಸಂತಾನಕ್ಕೆ ಸದ್ಗತಿ ಇತ್ತ ಗಂಗೆ, ತಮ್ಮ ಮಾತಾ ಪಿತೃಗಳಿಗೂ ಸ್ವರ್ಗ ದೊರಕಿ ಸಲೆಂದು ಗತಿಸಿದವರ ಅಸ್ತಿಯನ್ನೂ ಬೂದಿಯನ್ನೂ ಗಂಗೆಯಲ್ಲಿ ಬಿಡುವುದು ಜನರ ವಾಡಿಕೆ.

ಗಂಗೆ ಭಾರತದ ನದಿಗಳಲ್ಲಿ ಬಹಳ ಪವಿತ್ರವಾ ದುದು. ಹಿಮಾಲಯ ಪರ್ವತದಲ್ಲಿ ೧೩,೦೦೦ ಅಡಿ ಗಳ ಮೇಲಿರುವ ಗಂಗೋತ್ರಿಯಲ್ಲಿ ಗಂಗೆ ಜನಿಸು ತ್ತಾಳೆ. ಇದು ಸದಾಕಾಲದಲ್ಲಿಯೂ ಹಿಮ ಮತ್ತು ಮಂಜುಗಡ್ಡೆಯಿಂದ ಮುಚ್ಚಲ್ಪಟ್ಟಿರುವ ಇಕ್ಕಟ್ಟಾದ ಕಣಿವೆ. ಮಳೆಗಾಲದಲ್ಲಿ ಹಿಮಾಲಯದ ಬೆಟ್ಟ ಗಳಲ್ಲಿ ವಿಪರೀತ ಮಳೆ ಸುರಿಯುತ್ತದೆ. ಆದ್ದರಿಂದ ಆಗ ನದಿಯಲ್ಲಿ ನೀರಿಗೆ ಕೊರತೆಯಿಲ್ಲ. ಬೇಸಿಗೆ ಯಲ್ಲಿ ಮಂಜು ಕರಗಿ ನೀರಾಗಿ ಗಂಗೋತ್ರಿ ಕಣಿ

ವೆಗೆ ಸೇರುತ್ತದೆ. ಈ ಕಾರಣಗಳಿಂದ ಗಂಗೆಯಲ್ಲಿ ಸದಾಕಾಲದಲ್ಲಿಯೂ ಸಮೃದ್ಧಿಯಾಗಿ ನೀರು ಹರಿಯುತ್ತದೆ.

ಗಂಗೆಯಲ್ಲಿ ಸ್ನಾನಮಾಡುವುದರಿಂದ ಪಾಪ ಪರಿಹಾರವಾಗುತ್ತದೆಂದು ಹಿಂದೂಗಳ ನಂಬಿಕೆ. ಗಂಗಾನದಿಯ ದಡಗಳು ದೇವಾಲಯಗಳಿಂದಲೂ, ಪುಣ್ಯಕ್ಷೇತ್ರಗಳಿಂದಲೂ ತುಂಬಿವೆ. ಸುಪ್ರಸಿದ್ಧವಾದ ಕಾಶಿ ಇರುವುದೂ ಗಂಗಾತೀರದಲ್ಲಿಯೇ. ಕಾಶಿ ವಿಶ್ವನಾಥನ ದರುಶನಕ್ಕಾಗಿ ಭಾರತದ ಎಲ್ಲ ಭಾಗಗಳಿಂದಲೂ ಹಿಂದೂ ಯಾತ್ರಿಕರು ತಂಡತಂಡವಾಗಿ ಬರುತ್ತಾರೆ. ಪುರಾತನ ಕಾಲದಿಂದಲೂ ವಾರಣಾಸಿಯು ಭಾರತೀಯರ ಸಾಂಸ್ಕೃತಿಕ ಕೇಂದ್ರವಾಗಿದೆ. ಗಂಗಾ, ಯಮುನಾ ಮತ್ತು ಈಗ ಕಣ್ಮರೆಯಾಗಿರುವ ಸರಸ್ವತಿ ನದಿಗಳು ಸೇರುವ ಪ್ರಯಾಗ್ ಅಥವಾ ಅಲಹಾಬಾದ್ ಸಹ ಬಹಳ ಪ್ರಸಿದ್ಧವಾದ ಪುಣ್ಯಕ್ಷೇತ್ರ. ಎರಡು ವರುಷಗಳಿಗೊಮ್ಮೆ ಕುಂಭಮೇಳ ನಡೆಯುತ್ತದೆ. ಆ ಕಾಲದಲ್ಲಿ ಗಂಗೆಯಲ್ಲಿ ಸ್ನಾನಮಾಡಲು ಹರಿದ್ವಾರ, ಋಷಿಕೇಶ, ಕಾಶಿ, ಪ್ರಯಾಗ ಈ ಪುಣ್ಯಕ್ಷೇತ್ರಗಳಲ್ಲಿ ಲಕ್ಷಾಂತರ ಜನ ಸೇರುತ್ತಾರೆ. ಗಂಗಾನದಿಯ ಪುಣ್ಯಕ್ಷೇತ್ರಗಳು ಯಾತ್ರಿಕರನ್ನು ಆಕರ್ಷಿಸುವಂತೆ ಬೇರೆ ಯಾವ ಕ್ಷೇತ್ರಗಳೂ ಆಕರ್ಷಿಸುವುದಿಲ್ಲ.

ಗಂಗಾನದಿಯ ನೀರನ್ನು ಪವಿತ್ರ ಜಲವೆಂದು ಕೊಡಗಳಲ್ಲಿ ತುಂಬಿ ಮೊಹರು ಮಾಡಿ ತಮ್ಮ ಊರುಗಳಿಗೆ ಒಯ್ಯುತ್ತಾರೆ. ಈ ನೀರನ್ನು ದೇವರ ಅಭಿಷೇಕ ಮೊದಲಾದ ಪವಿತ್ರ ಕಾರ್ಯಗಳಿಗೆ ಬಳಸುತ್ತಾರೆ.

ಭಗವದ್ಗೀತೆಯನ್ನು ಬೋಧಿಸಿದ ಶ್ರೀಕೃಷ್ಣ ಪರಮಾತ್ಮ ಯಮುನಾ ತೀರದಲ್ಲಿ ಜನಿಸಿದ. ಬಾಲ ಲೀಲೆಗಳಾಡಿದ್ದು ಯಮುನಾ ತಟದಲ್ಲಿಯೇ. ಈ ಕಾರಣದಿಂದ ಯಮುನೆಯೂ ಹಿಂದೂಗಳಿಗೆ ಪವಿತ್ರವಾದ ನದಿ.

ಗಂಗಾ, ಯಮುನಾ ನದಿಗಳಲ್ಲದೆ ಸಿಂಧು, ಗೋದಾವರಿ, ತಪತಿ, ಕೃಷ್ಣ, ಕಾವೇರಿ, ತುಂಗಭದ್ರ ಈ ನದಿಗಳೂ ಅಷ್ಟೇ ಪ್ರಸಿದ್ಧವಾದುವು.

## ೩. ಪಾವನ ಜೀವನ

ಪ್ರತಿಯೊಂದು ನದಿಯ ವಿಷಯದಲ್ಲಿಯೂ ಸ್ವಾರಸ್ಯವಾದ ಕಥೆಗಳಿವೆ.

ಬೆಡಗಿನ ಕೊಡಗಿನಲ್ಲಿ ಜನ್ಮತಾಳಿದ ಕಾವೇರಿಯ ಕಥೆಯೂ ಹೀಗೆಯೇ. ಸುರಲೋಕದ ಸುಂದರಿಯಾದ ಲೋಪಾಮುದ್ರೆಯು ಕವೇರ ಮುನಿಯ ಪುತ್ರಿಯಾಗಿ ಜನ್ಮ ತಾಳಿ, ಕಾವೇರಿ ಎಂಬ ಹೆಸರು

ಪಡೆಯುತ್ತಾಳೆ. ತನ್ನ ತಂದೆಯ ಸೇವೆಯಲ್ಲೇ ಇರಬೇಕೆಂದು ಅವಳ ಹಂಬಲ. ಆದರೆ ಕಪಿಲ ಮುನಿಯು ಆಕೆಯನ್ನು ವರಿಸಲು ಅಪೇಕ್ಷಿಸುತ್ತಾನೆ. ಬೇರೆ ದಾರಿ ಕಾಣದೆ ಕಪಿಲ ಋಷಿಯನ್ನು ಕೈ ಹಿಡಿಯುತ್ತಾಳೆ. ಆದರೆ ಆಕೆಯ ಮನಸ್ಸೆಲ್ಲವೂ ಸೇವೆಯಲ್ಲಿಯೇ ನಿರತವಾಗಿರುತ್ತದೆ. ಆದ್ದರಿಂದ ಹಗಲಿರಳೂ, ನಿರಂತರ ಸೇವೆ ಸಲ್ಲಿಸಲು ಸಾಧ್ಯವಾಗುವಂತೆಯೂ,



ಅದರಿಂದ ತನ್ನ ತಂದೆಗೆ ಮೋಕ್ಷಪ್ರಾಪ್ತವಾಗುವಂತೆಯೂ ಆಕೆಯ ಆತ್ಮ ನದೀರೂಪು ತಾಳುತ್ತದೆ. ಅದೇ ಕಾವೇರಿ. ಆಹಾ, ಎಷ್ಟು ಅರ್ಥಗರ್ಭಿತವಾದ ಸುಂದರ ಕಥೆ! ಕಾವೇರಿ ಸಲ್ಲಿಸುವಂತೆ ಎಡಬಿಡದ ನಿಃಸ್ವಾರ್ಥಸೇವೆ ಯಾರು ತಾನೆ ಸಲ್ಲಿಸಬಲ್ಲರು? ಎನಿತು ಪಾವನ ಆಕೆಯ ಜೀವನ.

ಶ್ರೀರಂಗಪಟ್ಟಣದ ಸಮೀಪದಲ್ಲಿ ಕಾವೇರಿಯನ್ನು ಕೂಡಿಕೊಳ್ಳುವ ಒಂದು ಸಣ್ಣ ಉಪನದಿಯ ಹೆಸರು—ಲೋಕಪಾವನಿ. ಎಷ್ಟು ಪಾವನವಾದ ಹೆಸರು. ಲೋಕವನ್ನು ಪಾವನ ಮಾಡುವವರು

ದೇವತಾ ಸ್ವರೂಪಿಗಳಾದ ನದಿಗಳಲ್ಲದೆ ಮತ್ತೆ ಯಾರು ?

ಕಾವೇರಿ ಕೊಡಗಿನಲ್ಲಿ ಹುಟ್ಟಿ ಮೈಸೂರು ಮತ್ತು ಮದರಾಸು ರಾಜ್ಯಗಳಲ್ಲಿ ಹರಿದು ಬಂಗಾಳಕೊಲ್ಲಿಯನ್ನು ಸೇರುತ್ತದೆ. ಗಂಗಾ, ಯಮುನಾ, ಗೋದಾವರಿಯಷ್ಟು ದೊಡ್ಡ ನದಿಯಲ್ಲ ಕಾವೇರಿ. ಆದರೂ ಕಾವೇರಿಯನ್ನು ಬಹಳ ಪವಿತ್ರ ಭಾವನೆಯಿಂದ ನೋಡುತ್ತಾರೆ. ಕಾವೇರಿಯನ್ನು ದಕ್ಷಿಣದ ಗಂಗೆ ಎಂದು ಭಾವಿಸುತ್ತಾರೆ. ಶ್ರೀರಂಗಪಟ್ಟಣ, ಶ್ರೀರಂಗ, ಕುಂಭಕೋಣ ಇವು ಕಾವೇರಿ ತೀರದ ಪ್ರಸಿದ್ಧ ಕ್ಷೇತ್ರಗಳು. ದಕ್ಷಿಣ ದೇಶದ ದೇವಾಲಯಗಳು ಬಹಳ ಭವ್ಯವಾದುವು, ಬಹಳ ಪುರಾತನವಾದುವು.



ಉತ್ತರ ಭಾರತ ತೀರ್ಥಕ್ಷೇತ್ರಗಳಿಗೂ, ದಕ್ಷಿಣಭಾರತ ದಿವ್ಯವಾದ ದೇವಾಲಯಗಳಿಗೂ ಪ್ರಸಿದ್ಧವಾದುದು.

ಸದಾಕಾಲದಲ್ಲಿಯೂ ಸಮೃದ್ಧವಾದ ನೀರಿನಿಂದ ವಿಶಾಲವಾಗಿ ಹರಿಯುವ ನದಿಗಳೂ, ತೀರ್ಥಕ್ಷೇತ್ರಗಳೂ ದಕ್ಷಿಣ ದೇಶದವರನ್ನು ಆಕರ್ಷಿಸುತ್ತವೆ. ಭವ್ಯವಾದ ಗಿರಿಗೋಪುರಗಳು, ದಟ್ಟವಾದ ಕಾಡುಗಳೂ ಉತ್ತರ ಭಾರತದವರನ್ನು ದಕ್ಷಿಣಕ್ಕೆ ಬರಮಾಡಿಕೊಳ್ಳುತ್ತವೆ. ಗಂಗೆಯಲ್ಲಿ ಮಿಂದವರು, ಕಾವೇರಿಯಲ್ಲಿಯೂ ಸ್ನಾನಮಾಡಬೇಕು. ಬದರಿಯ ನಾರಾಯಣನ, ವಾರಣಾಸಿಯ ವಿಶ್ವೇಶ್ವರನ ದರುಶನದಿಂದ ಮಾತ್ರ ಪೂರ್ಣ ಫಲ ಪ್ರಾಪ್ತವಾಗದು ದಕ್ಷಿಣದ ರಾಮೇಶ್ವರದಲ್ಲಿ ದೇವರ ದರುಶನ ಪಡೆದು, ಕನ್ಯಾಕುಮಾರಿಯಲ್ಲಿ ಸ್ನಾನಮಾಡಿದರೆ ಮಾತ್ರವೇ ಪೂರ್ಣ ಫಲಪ್ರಾಪ್ತವಾಗುತ್ತದೆ ಎಂದು ಯಾತ್ರಾರ್ಥಿಗಳ ನಂಬಿಕೆ. ಉತ್ತರದವರು ದಕ್ಷಿಣಕ್ಕೂ, ದಕ್ಷಿಣದವರು ಉತ್ತರಕ್ಕೂ ಹೋಗುವಂತೆ ಮಾಡುವುದು ನದೀತೀರದ ಪುಣ್ಯಕ್ಷೇತ್ರಗಳು. ಹೀಗೆ ನದಿಗಳು ಪಾರಮಾರ್ಥಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ದೃಷ್ಟಿಯಿಂದ ಭಾರತೀಯರನ್ನು ಒಟ್ಟುಗೂಡಿಸಲು ಸಹಕಾರಿಯಾಗಿವೆ.

ಹಿಂದೂಗಳು ಪ್ರತಿದಿನ ಸ್ನಾನಮಾಡುವಾಗ—

" ಗಂಗೇಚ ಯಮುನೇ ಚೈವ, ಗೋದಾವರೀ ಸರಸ್ವತೀ ।
ನರ್ಮದಾ ಸಿಂಧು ಕಾವೇರೀ, ಜಲೇಸ್ಮಿನ್ ಸನ್ನಿಧಿಂಕರಾ॥ "

ಎಂಬ ಶ್ಲೋಕ ಹೇಳುತ್ತಾರೆ. "ನಾನು ಸ್ನಾನಮಾಡುತ್ತಿರುವ ಜಲದಲ್ಲಿ ಬಂದು ಸೇರಿ, ಅದನ್ನು ಪವಿತ್ರಗೊಳಿಸಿ" ಎಂದು ಸಪ್ತನದಿಗಳನ್ನೂ ಪ್ರಾರ್ಥಿಸುತ್ತಾನೆ. ಸ್ನಾನ ಮಾಡುವಾಗಲೆಲ್ಲಾ ಸಪ್ತನದಿಗಳನ್ನೂ ಸ್ಮರಿಸಿಕೊಳ್ಳುತ್ತಾನೆ. ಸ್ಮರಿಸಿಕೊಳ್ಳುವಂಥಾ ಸೇವೆ ಅವು ಸಲ್ಲಿಸುತ್ತವೆ. ಮಾನವನಿಗೆ ಸದಾ ಸಲ್ಲಿಸುತ್ತಿರುವ ಸೇವೆಯನ್ನು ಮನಸಾ ಸ್ಮರಿಸಿ, ತನ್ನ ಕೃತಜ್ಞತೆ ಅರ್ಪಿಸುತ್ತಾನೆ.

ನಿರಂತರ ಸೇವೆಯೇ ನದಿಗಳ ಧ್ಯೇಯ. ಅದೂ ಪ್ರತಿಫಲ ಅಪೇಕ್ಷಿಸದ ಸೇವೆ. ಉತ್ತಮ ಮಾನವನ ಬಾಳೂ, ಬದುಕೂ ಇರಬೇಕು ನದಿಗಳಂತೆ.

ಶುಭಾಶುಭಕಾರ್ಯಗಳನ್ನು ಕೈಗೊಳ್ಳುವಾಗ, ನದಿಯಲ್ಲಿ ಸ್ನಾನಮಾಡುವಾಗ 'ಸಂಕಲ್ಪ' ಮಾಡುವುದು ಹಿಂದೂಗಳ ಪುರಾತನ ಪದ್ಧತಿ. ಸಂಕಲ್ಪದ ಅರ್ಥ ತೀರ್ಮಾನ, ದೃಢನಿಶ್ಚಯ. ಭರತಖಂಡದಲ್ಲಿ, ಭರತವರ್ಷದಲ್ಲಿ ವಾಸಿಸುವ ನಾನು, ಈ ಪವಿತ್ರ ನದಿಯಲ್ಲಿ ಮಿಂದು ಈ ರೀತಿ ಪ್ರಮಾಣ ಮಾಡುತ್ತೇನೆ—ಎಂದಿದೆ 'ಸಂಕಲ್ಪ' ಮಂತ್ರದಲ್ಲಿ.

ಗೋದಾವರಿಯಿಂದ ಉತ್ತರಕ್ಕೆ ಇರುವವರೂ ಇದೇ ಮಂತ್ರ ಪಠಿಸುತ್ತಾರೆ. ಉತ್ತರದಲ್ಲಿರಲಿ, ದಕ್ಷಿಣವಾಸಿಗಳಾಗಲಿ ನಾವೆಲ್ಲ ಭರತಖಂಡದವರು, ನಾವೆಲ್ಲ ಭಾರತೀಯರು ಎಂಬ ಸಂಕಲ್ಪ ಮಾಡಿಸುತ್ತದೆ.



೩. ಭೂಗೋಳ ಮತ್ತು ಇತಿಹಾಸ

ಮಾನವ ಇತಿಹಾಸದಲ್ಲಿ, ನದಿಗಳ ಪಾತ್ರ ಬಹಳ ಪ್ರಧಾನವಾದುದು. ಹಿಂದಿನ ಕಾಲದ ಜನ ದನ ಕುರಿಗಳ ಮಂದೆಗಳನ್ನು ಕಟ್ಟಿಕೊಂಡು ನೀರು ಮತ್ತು ಮೇವಿಗಾಗಿ ಅಲೆಯುತ್ತಿದ್ದರು. ಸದಾ ಕಾಲದಲ್ಲಿಯೂ ನೀರೊದಗಿಸುತ್ತಿದ್ದ ನದಿ ಅವರಿಗೆ ಅನ್ನ ಮತ್ತು ಆಶ್ರಯ ನೀಡಿತು. ಹೆಚ್ಚು ಜನ ಬೇಸಾಯದಿಂದಲೇ ಬದುಕುತ್ತಿದ್ದರು. ಇಂದಿಗೂ ಭಾರತದಲ್ಲಿ ಭೂವ್ಯವಸಾಯದಿಂದ ಜೀವಿಸುವವರ ಸಂಖ್ಯೆಯೇ ಅತ್ಯಧಿಕ.

ಸುಮಾರು ೫೦೦೦ ವರುಷಗಳ ಹಿಂದೆ ಆರ್ಯರು ಸಿಂಧೂ ನದಿಯ ತೀರಕ್ಕೆ ಬಂದು ಅಲ್ಲಿಯೇ ವಾಸಿಸ ತೊಡಗಿದರು. ಅಲ್ಲಿಂದಲೇ ಭಾರತದ ಇತಿಹಾಸ ಮೊದಲಾದುದು. ಸಿಂಧೂ ಎಂಬ ಹೆಸರಿನಿಂದಲೇ, ಹಿಂದೂ–ಹಿಂದುಸ್ಥಾನ್ ಎಂಬ ಪದಗಳು ಹುಟ್ಟಿರ ಬೇಕು ಎಂದು ಬಲ್ಲವರು ಹೇಳುತ್ತಾರೆ.

ಅಲ್ಲದೆ ಕೈಗಾರಿಕೆಗೂ ನೀರು ಅಗತ್ಯ. ಕೈಗಾ ರಿಕೆಗಳಲ್ಲಿ ಕೆಲಸಮಾಡುವವರಿಗೂ ನೀರು ಬೇಕು. ಈ ಕಾರಣಗಳಿಂದ ನದಿಯ ಸಮೀಪದಲ್ಲಿ ನಗರಗಳು ಬೆಳೆಯುವುದು ಸಹಜ.

ನದಿಗಳು ವ್ಯಾಪಾರ ಮತ್ತು ವಹಿವಾಟಿಗೂ ಸಹಾಯಕವಾಗಿವೆ. ದೋಣಿಗಳ ಸಹಾಯದಿಂದ ಸರಕುಗಳನ್ನು ಸುಲಭವಾಗಿ ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಬಹುದು. ವೆಚ್ಚವೂ ಕಡಮೆ.

ನಮ್ಮ ದೇಶದಲ್ಲಿ ಸಂಚಾರಯೋಗ್ಯವಾದ ನದಿ ಗಳು ಹಲವು ಮಾತ್ರ. ಕಲ್ಲು ಬಂಡೆಗಳಿಲ್ಲದ, ಆಳ ವಾಗಿಯೂ ನಿಧಾನವಾಗಿಯೂ ಹರಿಯುವಲ್ಲಿ ಮಾತ್ರ ನದಿ ಸಂಚಾರ ಯೋಗ್ಯವಾದುದು. ಈ ದೃಷ್ಟಿ ಯಿಂದ ದಕ್ಷಿಣ ಭಾರತದ ನದಿಗಳು ಸಾಮಾನ್ಯವಾಗಿ



ಸಂಚಾರ ಯೋಗ್ಯವಲ್ಲ. ಗೋದಾವರಿ, ಕೃಷ್ಣ ಈ ಎರಡು ನದಿಗಳಲ್ಲಿ ಸ್ವಲ್ಪ ದೂರ ದೋಣಿಗಳಲ್ಲಿ ಸಂಚರಿಸ ಬಹುದು.

ದಕ್ಷಿಣ ದೇಶದ ನದಿಗಳಿಗೆ ಮಳೆಯೇ ಮುಖ್ಯ ಆಧಾರ. ಈ ಕಾರಣದಿಂದ ಈ ನದಿಗಳು ಬೇಸಿಗೆಯಲ್ಲಿ ಬತ್ತಿಹೋಗುತ್ತವೆ ಅಥವಾ ಬಹಳ ಕಿರಿದಾಗುತ್ತವೆ.

ಗಂಗಾ ನದಿಯಲ್ಲಿ ನದೀಮುಖದಿಂದ ಎಪ್ಪತ್ತು ಮೈಲಿಗಳವರೆಗೂ ಜಹಜುಗಳು ಹೋಗುತ್ತವೆ. ಭಾರತದ ಅತಿ ದೊಡ್ಡದಾದ, ಬಹು ಜನಸಂಖ್ಯೆ

ಯುಳ್ಳ ಕಲ್ಕತ್ತಾ ಹೂಗ್ಲಿ ತೀರದಲ್ಲಿದೆ. ಹೂಗ್ಲಿ, ಗಂಗಾನದಿಯ ಒಂದು ಕವಲು. ಕಲ್ಕತ್ತವರೆಗೂ ದೊಡ್ಡ ಜಹಜುಗಳು ಸಮುದ್ರದ ಕಡೆಯಿಂದ ಬರುತ್ತವೆ. ಸಣ್ಣ ದೋಣಿಗಳು ಇನ್ನೂ ಮೇಲಿನವರೆಗೂ ಹೋಗುತ್ತವೆ. ಕಲ್ಕತ್ತ ಸೆಣಬಿನ ಕಾರ್ಖಾನೆಗಳಿಗೆ ಬಹಳ ಪ್ರಸಿದ್ಧವಾದುದು. ಪ್ರಪಂಚದ ಬೇರೆಯಾವ ಭಾಗದಲ್ಲೂ ಇಷ್ಟು ಸೆಣಬಿನ ಗಿರಣಿಗಳಿಲ್ಲ. ಸೆಣಬಿನಿಂದ ಗೋಣಿಚೀಲ ಮೊದಲಾದುವುಗಳು ತಯಾರಾಗುತ್ತವೆ. ಫಲವತ್ತಾದ ಗಂಗಾನದಿಯ ಮುಖಜ ಭೂಮಿಯಲ್ಲಿ ವಿಶೇಷವಾಗಿ ಸೆಣಬು ಬೆಳೆಯಾಗುತ್ತದೆ. ದೇಶವಿದೇಶಗಳಿಗೆ ಈ ಗೋಣೀಚೀಲಗಳು ರಫ್ತಾಗುತ್ತವೆ. ಹೂಗ್ಲಿನದಿ ಮೇಲೆ ಕಬ್ಬಿಣದಿಂದ ಕಟ್ಟಿರುವಂಥಾ ಸೇತುವೆಗೆ ಭಾರತದಲ್ಲಿ ಸಾಟಿ ಇಲ್ಲ. ಕಲ್ಕತ್ತ ಇಷ್ಟು ದೊಡ್ಡ ನಗರವಾಗಲು, ಇಷ್ಟು ಜನಭರಿತವಾಗಲು ಗಂಗಾನದಿಯೇ ಮುಖ್ಯ ಕಾರಣ. ಪ್ರಸಿದ್ಧವಾದ ಕಾನಪುರವೂ ಗಂಗಾತೀರದಲ್ಲಿದೆ. ಈ ಊರು ಹತ್ತಿ ಗಿರಣಿಗಳ ಕಾರ್ಖಾನೆ, ಚರ್ಮದ ಸಾಮಾನುಗಳನ್ನು ತಯಾರಿಸುವ ಕಾರ್ಖಾನೆ, ಸಕ್ಕರೆ ಕಾರ್ಖಾನೆ ಇವುಗಳಿಗೆ ಪ್ರಸಿದ್ಧವಾದುದು. ಈ ಕಾರ್ಖಾನೆಗಳಿಗೆ ಅಗತ್ಯವಾದ ನೀರನ್ನು ಗಂಗೆ ಕೊಡುತ್ತಾಳೆ. ಗಿರಣಿಗಳಿಗೆ ಅಗತ್ಯವಾದ ಕಚ್ಚಾ

ಮಾಲನ್ನು ದೋಣಿಗಳಲ್ಲಿ ಸರಾಗವಾಗಿ ಸುಲಭದರ ದಲ್ಲಿ ಸಾಗಿಸಬಹುದು. ಸಿದ್ಧವಾದ ಸರಕನ್ನು ದೋಣಿ ಗಳ ಮೂಲಕ ಜಹಜುಗಳಿಗೆ ಸಾಗಿಸಿ ದೇಶವಿದೇಶಗ ಳಿಗೆ ಕಳುಹಿಸಬಹುದು. ಈ ಸೌಲಭ್ಯಗಳೇ ಗಂಗಾ ತೀರದಲ್ಲಿ ದೊಡ್ಡದೊಡ್ಡ ಗಿರಣಿಗಳುಳ್ಳ ಜನಭರಿತ ಪಟ್ಟಣಗಳು ಬೆಳೆಯಲು ಕಾರಣ.



ದಕ್ಷಿಣ ಭಾರತದ ನದಿಗಳು ಆಳವಾಗಿ ಹರಿಯು ತ್ತವೆ. ದಡಗಳು ಎತ್ತರವಾಗಿದ್ದು, ಹಳ್ಳದಲ್ಲಿ ನೀರು ಹರಿಯುವುದರಿಂದ ಪ್ರವಾಹದ ಭೀತಿ ಅಷ್ಟು ಅಧಿಕ ವಾಗಿಲ್ಲ. ಸಮುದ್ರ ಸೇರುವ ನದೀ ಮುಖಜಭೂಮಿ ಯಲ್ಲಿ ಮಾತ್ರ ಅವು ಭೂಮಟ್ಟದಲ್ಲಿ ಹರಿಯುತ್ತವೆ.

ಆದರೆ ಉತ್ತರ ಭಾರತದ ನದಿಗಳ ರೀತಿಯೇ ಪ್ರತ್ಯೇಕ. ಹಿಮಾಲಯದಲ್ಲಿ ಹುಟ್ಟುವ ನದಿಗಳು



ಬಹಳ ರಭಸದಿಂದ ಹರಿಯುತ್ತವೆ. ಹೀಗೆ ಹರಿಯುವಾಗ ಬೆಟ್ಟದಿಂದ ಕಲ್ಲು, ಮಣ್ಣು, ಮರಳು ಮುಂತಾದುವುಗಳನ್ನು ದೂಡಿಕೊಂಡು ಬರುತ್ತವೆ. ಮೈದಾನ ಪ್ರದೇಶಕ್ಕೆ ಬಂದ ಹಾಗೆ ಪ್ರವಾಹದ ವೇಗ ಕಡಮೆಯಾಗುತ್ತಾ ಬರುತ್ತದೆ. ಪ್ರವಾಹದ ಶಕ್ತಿ ಕಡಮೆಯಾದಂತೆ ಕಲ್ಲು ಮಣ್ಣು ಇವು ಮುಂದೆ ಹೋಗಲಾರದೆ ಅಲ್ಲಲ್ಲೇ ರಾಶಿಯಾಗಿ ನಿಲ್ಲುತ್ತವೆ. ಇದೇ ಮೆಕ್ಕಲು ಮಣ್ಣು. ಈ ಮಣ್ಣು ಭೂಮಿಯನ್ನು ಬಹು ಫಲವತ್ತಾಗಿ ಮಾಡುತ್ತದೆ.

ಒಂದು ರೀತಿಯಲ್ಲಿ ಹೀಗೆ ಉಪಕಾರವಾದರೆ ಮತ್ತೊಂದು ರೀತಿಯಲ್ಲಿ ಇದರಿಂದ ಅಪಾಯವೂ ಉಂಟು. ಈ ಕಲ್ಲುಮಣ್ಣಿನ ರಾಶಿ ನದಿಯ ಓಟಕ್ಕೆ ತಡೆಯಾಗುತ್ತದೆ. ನದಿಯ ತಳ ಏರುತ್ತಲೇ ಬರುತ್ತದೆ. ಆಳ ಕುಗ್ಗುತ್ತದೆ. ನದಿಯ ಮಟ್ಟ ಭೂಮಟ್ಟ ಒಂದೇ ಆಗುತ್ತದೆ. ಹೀಗಾಗಿ ಪ್ರವಾಹ ಬಂದಾಗ ನದಿ ದಡದಮೇಲೆ ಸುಲಭವಾಗಿ ಉಕ್ಕಿ ಹರಿಯುತ್ತದೆ. ದಂಡೆಯ ಮೇಲಿನ ಗ್ರಾಮಗಳಿಗೂ,

ಪಟ್ಟಣಗಳಿಗೂ, ಬೇಸಾಯದ ಭೂಮಿಯ ಮೇಲೂ ನೀರು ನುಗ್ಗಿ ಪ್ರವಾಹದಿಂದ ವಿಪರೀತ ನಷ್ಟ ಸಂಭವಿಸುತ್ತದೆ.

ಗಂಗೆಯ ಉಪನದಿಯಾದ ಕೋಸಿ ಪ್ರವಾಹಗಳಿಗೆ ಹೆಸರಾಂತದು. ಯಾವ ವರುಷವೂ ಪ್ರವಾಹದ ಹಾನಿಯಿಂದ ತಪ್ಪಿದ್ದಲ್ಲ. ಹೀಗಾಗಿ ಇದು 'ದುಃಖ ನದಿ' ಎಂದು ಪ್ರಸಿದ್ಧವಾಗಿದೆ. ಕೋಸಿ ತನ್ನ ಪಾತ್ರ ಬದಲಾಯಿಸುತ್ತಲೇ ಇರುತ್ತದೆ. ಪ್ರವಾಹ ಬಂದಾಗ ಜಲಪ್ರಳಯದಂತೆ ನೀರು ಹರಿಯುತ್ತದೆ. ಒಂದೇ ದಿನದಲ್ಲಿ ತನ್ನ ಪಾತ್ರ ಬಿಟ್ಟು ಅರ್ಧ ಮೈಲಿ ಆಚೆ ಹರಿಯುತ್ತಿರುತ್ತದೆ. ಕಳೆದ ೨೦೦ ವರುಷಗ



ಳಲ್ಲಿ ತನ್ನ ಮೊದಲ ಪಾತ್ರದಿಂದ ೭೦ ಮೈಲಿಗಳ ದೂರ ಕೋಸಿ ಸರಿದಿರುತ್ತದೆ !

ಗಂಗಾನದಿಯ ಶಾಖೆಯಾದ ಹೂಗ್ಲಿ ನದೀ ಮುಖದಲ್ಲಿಯೂ ಮರಳು ಹೀಗೇ ತುಂಬುತ್ತದೆ. ದೋಣಿಗಳ ಸಂಚಾರಕ್ಕೆ ಅನುಕೂಲವಾಗಲೆಂದು 'ಡ್ರೆಡ್ಜರ್' ಎಂಬ ಯಂತ್ರದ ಸಹಾಯದಿಂದ ಮರ ಳನ್ನು ತೆಗೆಸುತ್ತಲೇ ಇರುತ್ತಾರೆ.

ದಕ್ಷಿಣದ ನದಿಗಳು ಆಳದಲ್ಲಿ ಹರಿಯುವುದ ರಿಂದ ಪ್ರವಾಹದ ಅಪಾಯವೇನೋ ಕಡಮೆ. ಆದರೆ ಭೂಸಾಗುವಳಿಗೆ ಇದರಿಂದ ತೊಂದರೆ ಹೆಚ್ಚು. ನೀರನ್ನು ಮೇಲಕ್ಕೆ ಎತ್ತಿ ಬಳಸ ಬೇಕಾಗುತ್ತದೆ. ಏತ ಅಥವಾ ಪಂಪುಗಳಿಂದ ನೀರನ್ನು ಮೇಲಕ್ಕೆ ಎತ್ತ ಬೇಕು. ಅಥವಾ ಅಡ್ಡಗೋಡೆಯನ್ನು ಕಟ್ಟಿ ನೀರಿನ ಮಟ್ಟವನ್ನೇ ಹೆಚ್ಚಿಸಬೇಕು. ಈ ಅಡ್ಡಕಟ್ಟೆಗೆ ಅಣೆ ಕಟ್ಟು ಎಂದು ಹೆಸರು. ಈ ಕಾರಣದಿಂದಲೇ ದಕ್ಷಿಣ ದೇಶದಲ್ಲಿ ಅಣೆ ಕಟ್ಟುಗಳ ಸಂಖ್ಯೆ ಅಧಿಕ. ಕಾವೇರಿ ನದಿಗೆ, ಅದರ ಉದ್ದದೊಡನೆ ಹೋಲಿಸಿದರೆ, ಕಟ್ಟ ಲಾಗಿರುವಷ್ಟು ಅಣೆಕಟ್ಟು ಪ್ರಪಂಚದಲ್ಲಿ ಬೇರೆ ಯಾವ ನದಿಗೂ ಕಟ್ಟಿಲ್ಲ. ಕೃಷ್ಣರಾಜಸಾಗರ ಜಲಾಶಯ, ಮೆಟ್ಟೂರು ಜಲಾಶಯ, ಇವು ಹೆಸರುವಾಸಿಯಾ ದುವು. ಬೃಂದಾವನ ನೋಟಕ್ಕೆ ಹೆಸರಾಂತ ತೋಟ.

ಕಾವೇರಿ ನದಿಯು ತಲಕಾಡಿನ ಬಳಿ ತಿರುವಿನಲ್ಲಿ ತನ್ನ ಪಾತ್ರ ಬದಲಾಯಿಸುತ್ತದೆ. ಇದರಿಂದ ತಲಕಾಡು ಮರಳು ಕಾಡಾಗಿದೆ. ಒಮ್ಮೆ ಗಂಗರಸರ ರಾಜಧಾನಿಯಾಗಿದ್ದ ತಲಕಾಡು ಮರಳಿನಿಂದ ಮುಚ್ಚಿ ಹೋಗಿರುತ್ತದೆ. ೧೨ ವರುಷಗಳಿಗೊಮ್ಮೆ ಮರಳಲ್ಲಿ ಹೂತು ಹೋಗಿರುವ ಐದು ದೇವಾಲಯಗಳನ್ನು ಅಗೆದು ತೆಗೆದು ಪೂಜೆ ನಡೆಸುತ್ತಾರೆ. ಇದಕ್ಕೆ ಪಂಚಲಿಂಗ ದರುಶನವೆಂದು ಹೆಸರು.

ಕಾವೇರಿ ಶಿವನಸಮುದ್ರದಲ್ಲಿ ೩೦೦ ಅಡಿಗಳ ಎತ್ತರದಿಂದ ಧುಮುಕುತ್ತದೆ. ಇದಕ್ಕೆ ಗಗನಚುಕ್ಕಿ ಜಲಪಾತವೆಂದು ಹೆಸರು. ಇಲ್ಲಿ ೧೯೦೩ ರಲ್ಲಿಯೇ ಜಲ ವಿದ್ಯುಚ್ಛಕ್ತಿಯನ್ನು ಉತ್ಪನ್ನಮಾಡಲಾಯಿತು. ಭರತಖಂಡದಲ್ಲಿ ಸ್ಥಾಪಿತವಾದ ಜಲಪಾತದಿಂದ ವಿದ್ಯುತ್ತನ್ನು ಉತ್ಪನ್ನ ಮಾಡುವ ಯಂತ್ರಾಲಯಗಳಲ್ಲಿ ಇದು ಎರಡನೆಯದು. ಮೊಟ್ಟಮೊದಲ ಯಂತ್ರಾಲಯವು ಕಲ್ಕತ್ತೆಯ ಬಳಿ ಡಾರ್ಜಲಿಂಗ್ ಎಂಬ ಊರಿನಲ್ಲಿ



ಸ್ಥಾಪಿತವಾಯಿತು. ಕೈಗಾರಿಕೆಗಳ ಬೆಳವಣಿಗೆಗೆ ವಿದ್ಯುಚ್ಛಕ್ತಿ ಬಹಳ ಸಹಕಾರಿಯಾದುದು.

ಕಾವೇರಿಯ ನೀರು ಹೆಚ್ಚು ಬಳಕೆಗೆ ಬರುವಂತೆ ೧೯೧೧ ರಲ್ಲಿ ಕನ್ನಂಬಾಡಿಯ ಬಳಿ ಕಟ್ಟೆ ಕಟ್ಟಲಾಯಿತು. ಇದರಿಂದ ವಿದ್ಯುಚ್ಛಕ್ತಿಯ ಉತ್ಪಾದನೆಗೆ ಸದಾ ನೀರು ದೊರಕುವಂತಾಯಿತು. ಸಾವಿರಾರು ಎಕರೆಗಳ ಬಂಜರು ಭೂಮಿಗೆ ನೀರು ದೊರಕಿತು. ರೈತರು ಕಬ್ಬು ಬೆಳೆಯತೊಡಗಿದರು. ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪಿತವಾಯಿತು.



ಕನ್ನಂಬಾಡಿ ಅಥವಾ ಕೃಷ್ಣರಾಜಸಾಗರ ಜಲಾಶಯವನ್ನು ನಿರ್ಮಿಸಿದವರು ಮೋಕ್ಷಗುಂಡಂ

ವಿಶ್ವೇಶ್ವರಯ್ಯನವರು. ಆ ಕಾಲಕ್ಕೆ ಹಿಂದುಸ್ಥಾನದಲ್ಲಿ ಇದೇ ಅತಿ ದೊಡ್ಡದಾದ ಕಟ್ಟೆ. ಈ ಸಾಗರದ ಬಗ್ಗೆ ಗಮನಾರ್ಹ ವಿಷಯಗಳು ಅನೇಕ ಇವೆ. ಆ ಕಾಲದಲ್ಲಿ ಭಾರತದಲ್ಲಿ ಸಿಮೆಂಟ್ ವಿಶೇಷವಾಗಿ ತಯಾರಾಗುತ್ತಿರಲಿಲ್ಲ. ಪರದೇಶಗಳಿಂದ ಸಿಮೆಂಟ್ ತರಿಸಬೇಕಾಗಿತ್ತು. ಈ ಕಟ್ಟೆ ಕಟ್ಟಲು ಪರದೇಶಕ್ಕೆ ಇಷ್ಟು ಹಣ ಕಳುಹಿಸುವುದು ದೇಶಭಕ್ತರಾದ ಭಾರತ ರತ್ನ ವಿಶ್ವೇಶ್ವರಯ್ಯನವರಿಗೆ ಒಪ್ಪಿಗೆಯಾಗಲಿಲ್ಲ. ಗಾರೆ ಮತ್ತು ಇಟ್ಟಿಗೆಪುಡಿ ಬೆರಸಿ, ಅರೆದು 'ಸುರ್ಕಿ' ಎಂಬ ವಿಶೇಷ ಗಾರೆಯನ್ನು ಇದಕ್ಕಾಗಿ ತಯಾರಿಸಿದರು. ಆದನ್ನು ಬಳಸಿ ಕಟ್ಟೆಯನ್ನು ಕಲ್ಲಿನಿಂದ ಕಟ್ಟಿಸಿದರು. ಸ್ವಲ್ಪವೂ ಸಿಮೆಂಟ್ ಬಳಸಲಿಲ್ಲ.

ಕಟ್ಟೆಯಿಂದ ಹೊರಹೊರಡುವ ವಿಶ್ವೇಶ್ವರಾಯ ನಾಲೆ ಭೂಮಿಯ ಒಳಗೆ ಕೊರೆದಿರುವ ಸುರಂಗ ಮಾರ್ಗದಲ್ಲಿ ಹರಿಯುತ್ತದೆ. ಇದರ ಉದ್ದ ಒಂದೂ ಮುಕ್ಕಾಲು ಮೈಲಿ. ಭೂಮಿಯ ಒಳಗೆ ಭೂಗರ್ಭದಲ್ಲಿ ಹರಿಯುವ ನಾಲೆಗಳಲ್ಲಿ ಇದು ಬಲು ಉದ್ದವಾದುದೆಂದು ಹೆಸರುಗಳಿಸಿದೆ.

ಕೃಷ್ಣರಾಜಸಾಗರದ ಕಟ್ಟೆಯ ಬಳಿ ಬೃಂದಾವನ ಉದ್ಯಾನವನ್ನು ನಿರ್ಮಿಸಿರುತ್ತಾರೆ. ಇದು ಬಹಳ ಸುಂದರವಾದ ತೋಟವೆಂದು ಲೋಕಖ್ಯಾತಿಗಳಿಸಿದೆ.

## ೫. ನದೀ ಯೋಜನೆಗಳು

ಕೃಷ್ಣರಾಜ ಸಾಗರವನ್ನು ಮೀರಿಸುವ ಅನೇಕ ದೊಡ್ಡ ಜಲಾಶಯಗಳ ನಿರ್ಮಾಣಕಾರ್ಯ ಈಗ ನಮ್ಮ ದೇಶದಲ್ಲಿ ನಡೆದಿದೆ. ಇಂಥ ಜಲಾಶಯಗಳು ಪ್ರವಾಹದ ಭೀತಿಯಿಂದ ಜನರನ್ನು ಪಾರುಮಾಡುತ್ತವೆ. ಮಳೆಗಾಲದಲ್ಲಿ ನದಿಗಳಲ್ಲಿ ಹರಿದು ಪೋಲಾಗಿ ಹೋಗುವ ಹೆಚ್ಚುವರಿ ನೀರನ್ನು ತಡೆಹಿಡಿದು ಶೇಖರಿ



ತುಂಗಭದ್ರ ಜಲಾಶಯ

ಸುತ್ತವೆ. ಕಾಲುವೆಗಳ ಮೂಲಕ ನೂರಾರು ಮೈಲಿಗಳ ವರೆಗೆ ನೀರು ಸಾಗಿಸಲು ಸಾಧ್ಯಮಾಡುತ್ತವೆ. ಬರಡು ಭೂಮಿ ಭಂಗಾರದ ಭೂಮಿಯಾಗುತ್ತೆ. ಜಲ ವಿದ್ಯುತ್ ಶಕ್ತಿಯು ಉತ್ಪಾದನೆಗೆ ಸಹಾಯವಾಗುತ್ತೆ.



ಭಕ್ರಾ ಅಣೆಕಟ್ಟಿನ ಕೆಲಸ ಯಂತ್ರಗಳ ಸಹಾಯದಿಂದ ಸಾಗುತ್ತಿದೆ.

ನಮ್ಮ ದೇಶದ ಎರಡನೆ ಪಂಚವಾರ್ಷಿಕ ಯೋಜನೆಯಲ್ಲಿ ನೀರಾವರಿ ಕೆಲಸಗಳಿಗೆ ಮತ್ತು

ವಿದ್ಯುತ್ ಉತ್ಪಾದನೆಗಾಗಿ ೯೧೦ ಕೋಟಿ ರೂಪಾಯಿಗಳನ್ನು ಒದಗಿಸಿರುತ್ತಾರೆ. ೧೯೬೧ಕ್ಕೆ ಮುಗಿಯುವ ಐದು ವರುಷಗಳ ಈ ಅವಧಿಯಲ್ಲಿ ೨೦೦ ಹೊಸ ನೀರಾವರಿ ಕಾಂಗಾರಿಗಳನ್ನು ಕೈಗೊಳ್ಳಲಿದ್ದಾರೆ. ಇದರಿಂದ ೨೧ ದಶಲಕ್ಷ ಎಕರೆ ಭೂಮಿ ಸಾಗುವಳಿಗೆ ಬರುತ್ತದೆ. ಅಲ್ಲದೆ ೧೮೦ ವಿದ್ಯುತ್ ಕೇಂದ್ರಗಳನ್ನು



ತುಂಬಿದ ಹೀರಾಕುಡ್ ಜಲಾಶಯ

ಸ್ಥಾಪಿಸಲು ನಿರ್ಧರವಾಗಿದೆ. ಇದರಿಂದ ವಿದ್ಯುತ್ತಿನ ಉತ್ಪನ್ನ ಎರಡರಷ್ಟಾಗುತ್ತದೆ.

ಮಹಾನದಿ, ಸಟ್ಲೆಜ್, ತುಂಗಭದ್ರ, ದಾಮೋದರ, ಕೋಸಿ, ಚಂಬಲ್, ಭದ್ರ, ಕಪಿಲೆ, ಕೃಷ್ಣ, ಭವಾನಿ, ನರ್ಮದ ಮೊದಲಾದ ನದಿಗಳಿಗೆ ಅಣೆಕಟ್ಟು ಕಟ್ಟಲಾಗುತ್ತಿದೆ. ಮಹಾನದಿಗೆ ಹಿರಾಕುಡ್ ಬಳಿ ೧೭ ಮೈಲಿಗಳ ಉದ್ದದ ಅಣೆಕಟ್ಟು ನಿರ್ಮಾಣ



ಹಿರಾಕುಡ್ ಜಲಾಶಯದ ನೋಟ

ವಾಗಿದೆ. ಇದಕ್ಕಿಂತಲೂ ಉದ್ದವಾದ ಅಣೆಕಟ್ಟು ಪ್ರಪಂಚದಲ್ಲಿ ಬೇರೆ ಇಲ್ಲ.

ಸಟ್ಲೆಜ್ ನದಿಗೆ ಭಕ್ರಾಬಳಿ ಕಟ್ಟಲಾಗುತ್ತಿರುವ ಕಟ್ಟೆ, ಪ್ರಪಂಚದಲ್ಲೇ ಅತ್ಯುನ್ನತ ಪ್ರದೇಶದ ಅಣೆಕಟ್ಟೆಯಾಗಿದೆ.

ಕೋಸಿ ನದಿಗೆ ಕಟ್ಟಲಾಗುತ್ತಿರುವ ಅಣೆಕಟ್ಟು ಬಿಹಾರದ ಜನರನ್ನು ಪ್ರವಾಹದ ಭೀತಿಯಿಂದ ಪಾರು ಮಾಡುತ್ತದೆ.



ಹಿರಾಕುಡ್ ಜಲಾಶಯದ ತೂಬುಗಳು.

ಒಂದೊಂದು ಜಲಾಶಯದಲ್ಲೂ ಒಂದೊಂದು ವೈಶಿಷ್ಟ್ಯ ಅಥವಾ ವಿಶೇಷವಿದೆ. ದಾಮೋದರ ನದಿಗೆ ಬೊಖಾರೋ ಬಳಿ ಕಟ್ಟಿರುವ ಕಟ್ಟೆಯ ನೀರಿನಿಂದ ಜಲವಿದ್ಯುತ್ ಉತ್ಪನ್ನಮಾಡಲು ಯಂತ್ರಾಲಯ ಸಿದ್ಧ ವಾಗುತ್ತಿದೆ. ಸ್ವಲ್ಪ ಭಾಗ ಸಿದ್ಧವಾಗಿದೆ. ಪ್ರಪಂಚ ದಲ್ಲೇ ಅತ್ಯಂತ ದೊಡ್ಡದಾದ ವಿದ್ಯುತ್ ಉತ್ಪನ್ನ ಯಂತ್ರಾಲಯಗಳಲ್ಲಿ ಇದೂ ಒಂದು.

ನದೀ ಯೋಜನೆಗಳು ನಮ್ಮ ದೇಶದ ಇಂಜಿ ನಿಯರುಗಳ, ಶಿಲ್ಪಿಗಳ, ವಿಜ್ಞಾನಿಗಳ, ಕೆಲಸಗಾರರ ಪ್ರತಿಭೆಯ ಪ್ರತೀಕಗಳು. ನಮ್ಮ ದೇಶದ ಜನ ಬುದ್ಧಿಶಕ್ತಿಯಲ್ಲಿ, ಕಾರ್ಯಕ್ಷೇತ್ರದಲ್ಲಿ ಯಾರಿಗೂ ಕಡಮೆಯಿಲ್ಲವೆಂದು ಸಾಧಿಸಿ ತೋರಿಸಿಕೊಡುತ್ತವೆ. ಆತ್ಮಾಭಿಮಾನ, ದೇಶಾಭಿಮಾನ ಬೆಳೆಯಲು ಸಹಾ ಯಕವಾಗಿವೆ. ನಾನಾ ರಾಜ್ಯಗಳ, ನಾನಾ ಜಾತಿ ಮತ ಪಂಥಗಳ ಜನ ಒಂದಾಗಿ ಒಟ್ಟಾಗಿ ಕೆಲಸ ಮಾಡುವುದರಲ್ಲಿ ಭಾರತದ ವೈಶಿಷ್ಟ್ಯವಿದೆ. ಅಂಗ ಗಳು ಬೇರೆಯಾದರೂ ದೇಹ ಒಂದೇ, ದೇಶ ಒಂದೇ. ವೈವಿಧ್ಯತೆಯಲ್ಲಿ ಸಾಮರಸ್ಯ ಐಕ್ಯತೆ, ನದಿ ಕಲಿಸುವ ಪಾಠ.

ನದಿಗಳಿಗೆ ಅಣೆಕಟ್ಟು ಕಟ್ಟಬೇಕಾದುದು ಮತ್ತೊಂದು ದೃಷ್ಟಿಯಿಂದಲೂ ಅಗತ್ಯವಾಗಿದೆ. ನಮ್ಮ ನದಿಗಳಲ್ಲಿ ಹರಿಯುವ ನೀರಿನಲ್ಲಿ ನೂರರಲ್ಲಿ ಸುಮಾರು ೬ ಪಾಲುಮಾತ್ರ ಬಳಸಲಾಗುತ್ತಿದೆ. ಮಿಕ್ಕ ೯೪ ಭಾಗ ವ್ಯರ್ಥವಾಗುತ್ತಿದೆ. ಮಳೆಗಾಲದಲ್ಲಿ ಹೆಚ್ಚು ನೀರು ವೃಥಾ ಸಮುದ್ರಕ್ಕೆ ಹರಿದು ಹೋಗುತ್ತದೆ. [redacted] ಅಮೆಜಾನ್ ನದಿ ಸಮುದ್ರವನ್ನು ಸೇರುವಲ್ಲಿ, ಸಮುದ್ರದ ಉಪ್ಪುನೀರು ಒಂದು ಮೈಲಿಯುವರೆಗೆ ಸಿಹಿ ನೀರಾಗಿರುತ್ತದೆ. ಅಷ್ಟು ಅಪಾರ ಪ್ರಮಾಣದಲ್ಲಿ ನದಿಯ ನೀರು ಸಮುದ್ರದಲ್ಲಿ ಬೆರೆಯುತ್ತದೆ. ಚೀನಾ ದೇಶದ ಯಾಂಗ್ಸಿಟಿಕಿಯಾಂಗ್ ಸಮುದ್ರದಲ್ಲಿ ಸೇರುವ ಕಡೆಯೂ ಹೀಗೆಯೇ.

ಚೀನಾ ದೇಶದ ಪೀತ ನದಿ ಸಮುದ್ರವನ್ನು ಸೇರುವಲ್ಲಿ ಅನೇಕ ಮೈಲಿಗಳವರೆಗೆ ಸಮುದ್ರದ ನೀರು ಹಳದಿಯಾಗಿರುತ್ತದೆ. ಹಳದಿ ಬಣ್ಣದ ಮಣ್ಣು ಹಳದಿ ನದಿ ಹೊತ್ತು ತರುವುದರಿಂದ ಹೀಗಾಗುತ್ತದೆ. ಆದ್ದರಿಂದ ಈ ಭಾಗಕ್ಕೆ ಹಳದಿ ಸಮುದ್ರ ಎಂದು ಹೆಸರು ಬಂದಿದೆ. ಈ ದೊಡ್ಡ ನದಿಗೆ ೫೦ ಅಣೆಕಟ್ಟೆಗಳನ್ನು ಕಟ್ಟಿ ಹತೋಟಿಗೆ ತರುವ ಯೋಜನೆ ಜನತಾ ಚೀನಾ ಸಿದ್ಧಗೊಳಿಸಿದೆ.

ಈ ರೀತಿ ಮಳೆಗಾಲದಲ್ಲಿ ತುಂಬಿ ಹರಿಯುವ ಹೊಳೆಯ ನೀರು ಪೋಲಾಗದಂತೆ ಕಟ್ಟೆ ಕಟ್ಟಿ ಸಂಗ್ರಹಿಸುವುದು ಒಳಿತಲ್ಲವೇ?

## ೬. ಅಮರ ಸೇವೆ

ಹಿಮವತ್ಪರ್ವತದಲ್ಲಿ ಹುಟ್ಟುವ ನದಿಗಳಲ್ಲಿ, ಗಂಗಾ, ಸಿಂಧು, ಬ್ರಹ್ಮಪುತ್ರ ಇವು ಅತ್ಯಂತ ಪ್ರಮುಖವಾದ ನದಿಗಳು. ಸಿಂಧು ನದಿ ಹಿಮಾಲಯದ ಕೈಲಾಸ ಶಿಖರದ ಸಮೀಪದಲ್ಲಿ ಹುಟ್ಟುತ್ತದೆ. ಅಲ್ಲಿಂದ ಸುಮಾರು ೫೦೦ ಮೈಲಿಗಳವರೆಗೆ ಆಳವಾದ ಕಂದರಗಳಲ್ಲಿ ಹರಿಯುತ್ತದೆ. ಸಿಂಧ್ ಪ್ರಾಂತದ ಮೂಲಕ ಹರಿದು ಅರಬ್ಬೀ ಸಮುದ್ರವನ್ನು ಸೇರುತ್ತದೆ.

ಗಂಗಾ ನದಿಯು ೧೩,೦೦೦ ಅಡಿ ಎತ್ತರದ ಗಂಗೋತ್ರಿಯಲ್ಲಿ ಉದ್ಭವಿಸುತ್ತದೆ. ಉತ್ತರ ಪ್ರದೇಶ, ಬಿಹಾರ, ಬಂಗಾಳ ಪ್ರಾಂತಗಳಲ್ಲಿ ಹರಿದು ಬಂಗಾಳ ಕೊಲ್ಲಿಯನ್ನು ಸೇರುತ್ತದೆ.

ಬ್ರಹ್ಮಪುತ್ರಾ ನದಿಯು ಅಸ್ಸಾಂ, ಪೂರ್ವ ಪಾಕೀಸ್ಥಾನಗಳಲ್ಲಿ ಹರಿದು ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ಕೃಷ್ಣ, ಗೋದಾವರಿ, ಕಾವೇರಿ ಈ

ನದಿಗಳು ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಾ ಬಂಗಾಳ ಕೊಲ್ಲಿಯನ್ನು ಸೇರುತ್ತವೆ.

ಪೂರ್ವದಿಂದ ಪಶ್ಚಿಮಕ್ಕೆ ಹರಿವ ನದಿಗಳಲ್ಲಿ ಬಹಳ ಉದ್ದವಾದವು ನರ್ಮದಾ ಮತ್ತು ತಪತಿ. ಮಿಕ್ಕವು ಅಷ್ಟು ಉದ್ದವಾಗಿ ಹರಿಯುವ ನದಿಗಳಲ್ಲ. ಪ್ರಪಂಚದಲ್ಲೇ ಅತ್ಯಂತ ಎತ್ತರ ಜಲಪಾತವೆಂದು ಹೆಸರಾಗಿರುವ ಗೇರುಸೊಪ್ಪೆಯು ಪಶ್ಚಿಮಘಟ್ಟದ ಲ್ಲಿದೆ. ಶರಾವತಿ ನದಿಯು ಬಿಲ್ಲಿನಿಂದ ಹೊಡೆದ ಅಂಬಿ ನಂತೆ ವೇಗವಾಗಿ ಹರಿದು ೯೦೦ ಅಡಿಗಳ ಎತ್ತರದಿಂದ ಜಲಪ್ರವಾಹವಾಗಿ ಬೀಳುತ್ತದೆ.

ಈ ನದಿಗಳು ಎಷ್ಟು ಅನಾದಿ ಕಾಲದಿಂದ ಹರಿ ಯುತ್ತಿವೆ! ಪ್ರಪಂಚದಲ್ಲೇ ಅತ್ಯಂತ ದೊಡ್ಡದಾದ ಕಥಾ ಸಂಗ್ರಹ ಮಹಾಭಾರತ. ಒಂದೊಂದು ನದಿಯೂ ತಾನು ಹುಟ್ಟಿದ ಕಾಲದಿಂದ ಇದುವರೆಗಿನ ಕಥೆ ಹೇಳತೊಡಗಿದರೆ ಎಷ್ಟು ಮಹಾಭಾರತಗಳಾ ದಾವು. ಒಂದೊಂದು ನದಿಯ ತೀರದಲ್ಲೂ ಆಗಿ ಹೋದ ಸಾಮ್ರಾಜ್ಯಗಳ ಕಥೆ ಜೋಡಿಸಿದರೆ, ಭರತ ಖಂಡದ ಇತಿಹಾಸವೇ ಆಗುತ್ತದೆ.

ಯಮುನಾ ನದಿಯ ತೀರದಲ್ಲಿ ದಿಲ್ಲಿ ನಗರ ವಿದೆ. ಕೌರವ, ಪಾಂಡವರ ಕಾಲದಿಂದ, ನಮಗೆ

ತಿಳಿದಿರುವಂತೆ, ಇಲ್ಲಿ ಎಷ್ಟೋ ಸಾಮ್ರಾಜ್ಯಗಳು ಹುಟ್ಟಿ, ಬಾಳಿ, ಬದುಕಿ ಕಣ್ಮರೆಯಾದುವು. ಗಂಗಾ–ಯಮುನಾ ನದಿಗಳ ಬಯಲಿನಲ್ಲಿ ಎಷ್ಟು ಯುದ್ಧಗಳು ನಡೆದಿವೆ, ರಕ್ತದ ಕೋಡಿ ಎಷ್ಟು ಹರಿದಿದೆ, ಸಾಮ್ರಾಜ್ಯಗಳು ಎಷ್ಟು ಧೂಳೀಪಟವಾಗಿವೆ. ರಾಮ, ಕೃಷ್ಣ, ಬುದ್ಧ, ಶಂಕರ, ವಿವೇಕಾನಂದ, ಮಹಾತ್ಮ ಗಾಂಧಿ ಮೊದಲಾಗಿ ಎಷ್ಟು ಮಹಾವಿಭೂತಿ ಪುರುಷರು ಗಂಗಾ ಜಲ ಸನ್ನಿಧಿಯಲ್ಲಿ ಪುನೀತರಾಗಿ ಹೋದರು.

ನಮ್ಮ ದೇಶದ ಧಾರ್ಮಿಕ, ಆರ್ಥಿಕ, ಸಾಮಾಜಿಕ ಪ್ರಗತಿಯಲ್ಲಿ ನದಿಗಳ ಪಾತ್ರ ಮಹತ್ವಪೂರಿತವಾದುದು. ಪುರಾತನ ಪುಣ್ಯನಗರಗಳು, ತೀರ್ಥಕ್ಷೇತ್ರಗಳು, ಗುಡಿಗೋಪುರಗಳು, ಕೈಗಾರಿಕೆ, ವ್ಯಾಪಾರ ವಹಿವಾಟು ಇವು ಬೆಳೆದು ಬಾಳಲು ನದಿಗಳು ನೀಡಿರುವ ಸಹಾಯ ಅಳೆಯಲಸದಳ. ಇತಿಹಾಸವನ್ನೇ ಅವು ರೂಪಿಸಿವೆ.

'ಬಲ್ಲವನು ನಾನೆಂದು ಬಲು ಮೆರೆಯಬೇಡ; ಬಲುಮೆಯು ನನ್ನಲ್ಲಿರುವುದು' ಎಂದು ಹಿಗ್ಗಬೇಡ, ಗರ್ವಿಸಬೇಡ. ನನ್ನಷ್ಟು ಕಾಲ ನೀ ಬದುಕಲಾರೆ. ಮಾನವನಿಗೆ ಮರಣ ತಪ್ಪಿದ್ದಲ್ಲ. ನನ್ನಂತೆ ನೀನು ಅಮರನಲ್ಲ, ಚಿರಜೀವಿಯಲ್ಲ. ಒಂದು ಕ್ಷಣವಾದರೂ

ಘುಮ್ಮನಿರದೆ ಸೇವೆಯಲ್ಲಿ, ಸೇವೆಗೋಸ್ಕರ ಶ್ರಮಿಸುತ್ತಲೇ ಇರುವುದರಿಂದ ಪರಮಾತ್ಮ ನನ್ನನ್ನು ಅಮರನಾಗಿರುವಂತೆ ಹರಸಿದ್ದಾನೆ. ಸೂರ್ಯ, ಮೋಡ, ಭೂಮಿ, ಮಳೆ ಇವೆಲ್ಲವೂ ನನ್ನ ಸೇವಾ ಬುದ್ಧಿಯನ್ನು ಮೆಚ್ಚಿ ನನಗೆ ಸಹಾಯ ನೀಡುತ್ತವೆ. ಯಾವ ಭೇದವನ್ನೂ ಎಣಿಸದೆ ಸೇವೆಗೆ ಸದಾ ಸಿದ್ಧ ನಾನು. ಸೇವೆಯೇ ನನ್ನ ಬಾಳು, ಬದುಕು.

ಅವರ ನುಡಿ, ನಡೆ, ಧರ್ಮ ಏನೇ ಇರಲಿ— ಭಾರತ ಭೂಮಿಯಲ್ಲಿರುವ ಎಲ್ಲರೂ ನನ್ನ ಅಣ್ಣ ತಮ್ಮಂದಿರು, ಅಕ್ಕತಂಗಿಯರು ಎಂಬ ಭಾವನೆ ನಿಮಗೆ ಮಾರ್ಗದರ್ಶಕವಾಗಲಿ. ದೇಹ ಸತ್ತರೂ, ಸಲ್ಲಿಸಿದ ಸೇವೆ, ನದಿಯಂತೆ ಅಮರವಾಗಿ ಬಾಳಲಿ.



